ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 290 |
| ಸದಸ್ಯರ ಹೆಸರು | ಶ್ರೀ. ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ವಿಷಯ | "ಅಂಗವಿಕಲರ ಮಾಶಾಸನದ ಬಗ್ಗೆ" |
| ಉತ್ತರಿಸಬೇಕಾದ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು. |
| **ಪ್ರಶ್ನೆ** | **ಉತ್ತರ** |
| ಅ) ರಾಜ್ಯದಲ್ಲಿ ಅಂಗವಿಕಲ ಮಾಶಾಸನ ಪಡೆಯುತ್ತಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಒಟ್ಟು 868331 ಫಲಾನುಭವಿಗಳು ಅಂಗವಿಕಲ ಮಾಶಾಸನ ಪಡೆಯುತ್ತಿದ್ದಾರೆ. |
| ಆ) ಪ್ರಸ್ತುತ ಸರ್ಕಾರ ನೀಡುತ್ತಿರುವ ಅಂಗವಿಕಲ ಮಾಶಾಸನ ಪ್ರಮಾಣ ಎಷ್ಟು; | ಸರ್ಕಾರ ನೀಡುತ್ತಿರುವ ಅಂಗವಿಕಲ ಮಾಶಾಸನ ಪ್ರಮಾಣ ಈ ಕೆಳಗಿನಂತಿದೆ.<br><br>ಅಂಗವಿಕಲತೆ ಆಧಾರ — ಒಟ್ಟು ಪಿಂಚಣಿ ಮೊತ್ತ (ರೂಗಳಲ್ಲಿ)<br>ಶೇ.40 ರಿಂದ ಶೇ.74 ಅಂಗವಿಕಲತೆ — 600<br>ಶೇ.75 ಕ್ಕಿಂತ ಹೆಚ್ಚಿನ ಅಂಗವಿಕಲತೆ — 1400 |
| ಇ) ಕಳೆದ 6-7 ತಿಂಗಳಿಂದ ಮಾಶಾಸನ ಬಿಡುಗಡೆ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br><br>ಈ) ಬಂದಿದ್ದಲ್ಲಿ, ಶೀಘ್ರ ಬಿಡುಗಡೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ತಿಳಿಸಿ) | ವಿವಿಧ ಸಾಮಾಜಿಕ ಯೋಜನೆಗಳಡಿ ಮಾಸಿಕ ಪಿಂಚಣಿ ನಿರ್ವಹಣಾ ಪ್ರಕ್ರಿಯೆಯನ್ನು ಜನವರಿ 2020 ರಿಂದ ಪೂರ್ಣವಾಗಿ ಖಜಾನೆ-2 ವ್ಯವಸ್ಥೆಯಡಿ ತರಲಾಗಿದ್ದು, ಹಿಂದಿನ ಖಜಾನೆ-1 ವ್ಯವಸ್ಥೆಯಡಿ ಅಸಮರ್ಪಕ ವಿಳಾಸ, ಪಿನ್ ಕೋಡ್, ಬ್ಯಾಂಕ್ ಖಾತೆ ಸಂಖ್ಯೆ, ಐ.ಎಫ್.ಎಸ್.ಸಿ ಕೋಡ್ ಇತ್ಯಾದಿ ಮಾಹಿತಿಯುಳ್ಳ ದಾಖಲೆಗಳನ್ನು ಖಜಾನೆ-2ಗೆ ವರ್ಗಾಯಿಸಲು ಸಾಧ್ಯವಾಗದಿರುವ ಪ್ರಕರಣಗಳನ್ನು ಹಾಗೂ ಪಿಂಚಣಿ ಪಾವತಿಯಾಗದೇ ಸ್ಥಗಿತಗೊಂಡ ಪ್ರಕರಣಗಳನ್ನು ಕಡ್ಡಾಯ ಭೌತಿಕ ಪರಿಶೀಲನೆಗೆ ಒಳಪಡಿಸಿ, ನಿಖರ ಮಾಹಿತಿಯನ್ನು ಸಂಗ್ರಹಿಸಿ ಕ್ರಮವಹಿಸಲಾಗುತ್ತಿದ್ದು. ನ್ಯೂನ್ಯತೆಯನ್ನು ಸರಿಪಡಿಸಿ ಕ್ರಮವಹಿಸಿದ ಪ್ರಕರಣಗಳನ್ನು ಅನುಕಲನೆ ಮೂಲಕ ಖಜಾನೆ-2 ತಂತ್ರಾಂಶಕ್ಕೆ ವರ್ಗಾಯಿಸಿ, ಮರುಹೊಂದಾಣಿಕೆ ಮಾಡಿಕೊಂಡು ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿರುವ ಹಿನ್ನೆಲೆಯಲ್ಲಿ ಮಾಸಾಶನ ಬಿಡುಗಡೆಗೆ ವಿಳಂಬವಾಗುತ್ತಿದೆ. ಎಲ್ಲಾ ಅರ್ಹರಿಗೆ ಜಿಲ್ಲಾ ಖಜಾನೆಯಲ್ಲಿ ಡಿಸೆಂಬರ್ 2020 ರವರೆಗೆ ಪಿಂಚಣಿ ಪಾವತಿಸುವಲ್ಲಿ ಬಿಲ್ಲು ತಯಾರಿಸಿ ಕ್ರಮವಹಿಸಲಾಗಿದೆ. |

ಸಂಖ್ಯೆ: DSSP/LCQ/1/2021

(ಆರ್.ಅಶೋಕ್)
ಕಂದಾಯ ಸಚಿವರು